


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 15-03-2021 ಪ್ರಶ್ನೆ ಸಂಖ್ಯೆ : 172(978)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎನ್. ರವಿಕುಮಾರ್(ವಿಧಾನಸಭೆಯಿಂದ ಚುನಾಯಿತರಾದವರು )

ಉತ್ತರ ನೀಡಬೇಕಾದ ದಿನಾಂಕ : 15-03-2021

ಉತ್ತರಿಸುವ ಸಚಿವರು: ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

ವಿಷಯ : ವೈದ್ಯಕೀಯ ಕಾಲೇಜುಗಳಲ್ಲಿ ಸೀಟ್ ಬ್ಲಾಕಿಂಗ್ ಕುರಿತು

(ಅ) ವೈದ್ಯಕೀಯ ಕಾಲೇಜುಗಳು ಸೀಟ್ ಬ್ಲಾಕಿಂಗ್ ದಂಧೆ ನಡೆಸುತ್ತಿರುವ ಬಗ್ಗೆ ಸರ್ಕಾರದ ನಿಲುವೇನು;

(ಆ) ಕಳೆದ ಎರಡು ವರ್ಷಗಳಲ್ಲಿ ಎಷ್ಟು ವೈದ್ಯಕೀಯ ಕಾಲೇಜುಗಳಿಗೆ ಸೀಟ್ ಬ್ಲಾಕಿಂಗ್ ಕುರಿತು ವಿಶ್ವವಿದ್ಯಾಲಯದಿಂದ ನೋಟಿಸ್ ನೀಡಲಾಗಿದೆ; ಸೀಟ್ ಬ್ಲಾಕಿಂಗ್ ದಂಧೆ ನಡೆಸುತ್ತಿರುವ ವೈದ್ಯಕೀಯ ಕಾಲೇಜುಗಳ ಅಫಿಲಿಯೇಷನ್ ರದ್ದುಗೊಳಿಸಲು ಸರಕಾರ ಯಾವ ಕ್ರಮ ಕೈಗೊಂಡಿದೆ;

(ಇ) ಮಂಗಳೂರಿನ ಕೆಲವು ವೈದ್ಯಕೀಯ ಕಾಲೇಜುಗಳು ಸೀಟ್ ಬ್ಲಾಕಿಂಗ್ ದಂಧೆ ನಡೆಸುತ್ತಿರುವ ಬಗ್ಗೆ ಪತ್ರಿಕೆಯಲ್ಲಿ ವರದಿಯಾಗಿದ್ದು, ಇದರಿಂದ 400 ಕೋಟಿಗೂ ಹೆಚ್ಚಿನ ಮೊತ್ತ ಪತ್ತೆ ಹಚ್ಚಲಾದ ಕುರಿತು ಸರಕಾರದ ನಿಲುವೇನು; ಸೀಟ್ ಬ್ಲಾಕಿಂಗ್ ದಂಧೆಯ ಕುರಿತು ಪೊಲೀಸ್ ಠಾಣೆಯಲ್ಲಿ ದೂರು ನೀಡಲಾಗಿದೆಯೇ; ಇಲ್ಲದಿದ್ದಲ್ಲಿ ದೂರು ದಾಖಲು ಮಾಡುವುದು ಯಾವಾಗ;

(ಈ) ಸೀಟ್ ಬ್ಲಾಕಿಂಗ್ ದಂಧೆಯ ಹಣದಲ್ಲಿ ವಿಶ್ವವಿದ್ಯಾಲಯದ ಅಧಿಕಾರಿಗಳಿಗೂ ಪಾಲು ಇರುವುದಾಗಿ ಮಾಹಿತಿ ಇದ್ದು, ಈ ಕುರಿತು ಸರಕಾರದ ನಿಲುವೇನು; ವೈದ್ಯಕೀಯ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ಈ ಕುರಿತು ನೋಟಿಸ್ ನೀಡಲಾಗಿದೆಯೇ?